# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

'ಮುಂಜಾವು' ವಾರಪತ್ರಿಕೆ, ಕೊಪ್ಪ.

| ಚಂದಾ ದರ | ಜಾಹೀರಾತು ದರ |
|---|---|
| ಬಿಡಿ ಪ್ರತಿ ೪೦ ಪೈಸೆ | (ಕಾಲಂ ಸೆಂ. ಮೀ. ಗೆ) |
| ವಾರ್ಷಿಕ ಚಂದಾ ೨೦ರೂ. | ಮುಖಪುಟದಲ್ಲಿ: ೫ ರೂ. |
| ಆಜೀವ ಚಂದಾ ೨೦೦ರೂ | ಇತರಪುಟಗಳಲ್ಲಿ: ೪ ರೂ. |

೫ ವಾರ ಅಥವಾ ಅದಕ್ಕಿಂತ ಹೆಚ್ಚು ಕಾಲ ಪ್ರಕಟಣೆಗೆ ಕೊಡುವ ಕಾಂಟ್ರಾಕ್ಟ್ ಜಾಹೀರಾತುಗಳಿಗೆ ಭಾರಿ ರಿಯಾಯ್ತಿ ಉಂಟು.

ಸಂಪುಟ ೧ ಸಂಚಿಕೆ ೪೭ ಭಾನುವಾರ ೨೪–೭–೧೯೮೩ ಕೊಪ್ಪ ಬೆಲೆ ೪೦ ಪೈಸೆ


# ಹಾಲು ಶೈತ್ಯೀಕರಣ ಕೇಂದ್ರದ ತಣ್ಣನೆಯ ಮೋಸದ ಕತೆ

**ಬಾಳೆಹೊನ್ನೂರು: ಸರ್ಕಾರ ಜನರ ಉಪಯೋಗಕ್ಕಾಗಿ ಜಾರಿಗೆ ತರುವ ಕಾರ್ಯಕ್ರಮವೊಂದು ಜವಾಬ್ದಾರಿ, ಕಳಕಳಿ ಮತ್ತು ಅನುಭವಗಳಿಲ್ಲದ ನೌಕರರ ಕೈಗೆ ಸಿಕ್ಕಿದರೆ ಹೇಗೆ ಜನರಿಗೆ ಉರುಳಾಗಬಹುದು ಎಂಬುದಕ್ಕೆ ಮಾದರಿಯಾದ ಪ್ರಕರಣವೊಂದು ಬೆಳಕಿಗೆ ಬಂದಿದೆ.**

ಬಹಳ ಮಹತ್ವಾಕಾಂಕ್ಷೆಯಿಂದ ಇಲ್ಲಿ ಕಳೆದ ವರ್ಷ ಆರಂಭವಾದ ಹಾಲು ಶೈತ್ಯೀಕರಣಸಂಗ್ರಹಾಗಾರ-ಚಿಲ್ಲಿಂಗ್ ಪ್ಲಾಂಟ್—ತನ್ನನ್ನೇ ನಂಬಿಕೊಂಡಿದ್ದ ಕೊಪ್ಪ, ಶೃಂಗೇರಿ ಮತ್ತು ನರಸಿಂಹರಾಜ ಪುರ ತಾಲ್ಲೂಕುಗಳ ಹಾಲು ಸಂಗ್ರಹಣೆಯ ಉಪಕೇಂದ್ರಗಳನ್ನು ಮುಳುಗಿಸಿರುವ ರೀತಿ, ಹಿಂದಿನ ಸರ್ಕಾರದಲ್ಲಿದ್ದ ಮತ್ತು ಈಗಿನ ಸರ್ಕಾರದಲ್ಲಿರುವ ಜವಾಬ್ದಾರಿಯುತರು ಯೋಚಿಸಿ ಕ್ರಮ ಕೈಗೊಳ್ಳ ಬೇಕಾದ ಸಂಗತಿಯಾಗಿದೆ. ಈ ಕೇಂದ್ರದ ಜವಾಬ್ದಾರಿ ರಹಿತವಾದ ಕೆಲಸ ನಿರ್ವಹಣೆಯಿಂದ ಆಗಳಗಂಡಿ (ದಿನಕ್ಕೆ ೬೦ ಲೀಟರ್), ಬೇಗಾರು (೪೮), ಶಾಂತಿಗ್ರಾಮ (೩೦), ಜಯಪುರ (೨೫), ಮಾಗುಂಡಿ(೨೫)— ಈ ಉಪಕೇಂದ್ರಗಳು ಈಗಾಗಲೇ ಹಾಲು ಸಂಗ್ರಹಣೆ ನಿಲ್ಲಿಸಿದ್ದು, ಹೇರೂರು, ಗುಡ್ಡೇತೋಟ ಮತ್ತು ಬಿಳಲುಕೊಪ್ಪಗಳಲ್ಲಿನ ಉಪಕೇಂದ್ರಗಳೂ ತೀವ್ರ ನಷ್ಟದಿಂದ ಮುಚ್ಚುವ ಸ್ಥಿತಿಯಲ್ಲಿವೆ ಎನ್ನಲಾಗಿದೆ.

**ಅನನುಭವಿ ಮೇಲ್ವಿಚಾರಕ?**

ಹಾಲು ಉತ್ಪಾದಕರಿಂದ ಹಾಲಿನ ಗುಣಮಟ್ಟ ಮತ್ತು ಕೊಬ್ಬಿನ ಪ್ರಮಾಣಗಳನ್ನು ನಿಗದಿತ ರೀತಿಯ[illegible] ಅಳತೆಮಾಡಿ ಸಂಗ್ರಹಿಸುವ ಉಪಕೇಂದ್ರಗಳು ಅವರಿಗೆ ಲೀಟರಿಗೆ ೨ ರೂ. ೪೦ ಪೈಸೆಯಿಂದ ೨–೮೦ ರವರೆಗೂ ಪಾವ್ತಿ ಮಾಡುತ್ತವೆ. ಅಲ್ಲಿಂದ ಡೈರಿಯವರ ಸಂಗ್ರಹಣಾ ವಾಹನದ [illegible] ಇಲ್ಲಿನ ಶೈತ್ಯಾಗಾರಕ್ಕೆ ಬರುವ ಹಾಲನ್ನು ಇಲ್ಲಿ ಪುನಃ ಗುಣಮಟ್ಟ ನಿರ್ಧಾರಣೆ ಮಾಡಿ, ಬೆಲೆ ನಿಗದಿ ಮಾಡಲು ದಿನಕರ ಮತ್ತು ಸತ್ಯ ಎಂಬ ನೌಕರರಿದ್ದಾರೆ. ಆದರೆ ಅವರುಗಳಿಗೆ ಈ ಕೆಲಸಗಳ ಬಗ್ಗೆ ಸರಿಯಾದ ಮಾಹಿತಿ ಇಲ್ಲವೆನ್ನಲಾಗಿದೆ. ಇವರು ತಪ್ಪು ಕ್ರಮದಲ್ಲಿ ಮಾಡುತ್ತಿದ್ದ ಹಾಲು ಪರೀಕ್ಷೆಯಿಂದಾಗಿ ಉಪಕೇಂದ್ರಗಳಿಗೆ ಪದೇ ಪದೇ ಕಡಿಮೆ ಹಣ ಪಾವ್ತಿ ಅಥವಾ 'ಸೊನ್ನೆ' ಪಾವ್ತಿ (ನೋ ಪೇಮೆಂಟ್)ಗಳಾಗಿ ಅವು ವಿಪರೀತ ನಷ್ಟ ಅನುಭವಿಸಲು ಕಾರಣವಾಯಿತೆನ್ನಲಾಗಿದೆ.

**ಪತ್ತೆ**

ಸಾಕಷ್ಟು ಮಾಹಿತಿಯುಳ್ಳ ಸಂಗ್ರಾಹಕರಿರುವ ಗುಡ್ಡೇತೋಟ ಉಪಕೇಂದ್ರ ಪದೇ ಪದೇ ಇಂಥ 'ಪ್ರತಿಫಲ' ಪಡೆದಾಗ, ಅಧಿಕಾರಿಗಳೆದುರು ಈ ನೌಕರರ ಅಸಮರ್ಪಕ ಕೆಲಸ ಋಜುವಾತು ಪಡಿಸಿದ್ದು, ಮೇಲಧಿಕಾರಿಗಳಿಗೆ ದೂರಿದ್ದು ಎಲ್ಲ ವಿಫಲವಾದುದಲ್ಲದೆ, ಇಲ್ಲಿನ ನೌಕರರು ಸದರಿ ಹಾಲನ್ನು ೩ ರೂ. ನಂತೆ ಊರಲ್ಲಿ ಮಾರಿಕೊಂಡಿದ್ದೂ ತಿಳಿದು, ಕೊನೆಗೆ, ಜು. ೨೦ರಂದು ಉತ್ಪಾದಕರು ಜಿಲ್ಲಾ ರೈತ ಸಂಘದ ಅಧ್ಯಕ್ಷ ಮಳಿಗೆ ಚಂದ್ರಶೇಖರ್ ಜೊತೆ ಕೇಂದ್ರಕ್ಕೆ ಹೋಗಿ, ಅವರು ಪರೀಕ್ಷೆ ಮಾಡುವ ಕ್ರಮವನ್ನು ಗಮನಿಸಿದಾಗ ದಿನಕರ್‌ಗೆ ಮಾಹಿತಿಯಿಲ್ಲದ್ದು ತಿಳಿಯಿತೆಂದೂ, ಅವರು ತಮ್ಮ ಅನನುಭವ ಮತ್ತು ಬೇಜವಾಬ್ದಾರಿಯ ಬಗ್ಗೆ ಕ್ಷಮೆ ಕೇಳಿ ಮುಂದೆ ಸರಿಯಾಗಿ ನಿರ್ವಹಿಸುವುದಾಗಿ ಒಪ್ಪಿಕೊಂಡಿದ್ದಾರೆಂದೂ ಗುಡ್ಡೇತೋಟ ಪಂಚಾಯ್ತಿ ಅಧ್ಯಕ್ಷ ಎ. ಹೆಚ್. ಮೊಹಿಯುದ್ದೀನ್ ತಿಳಿಸಿದ್ದಾರೆ.

ಈ ನೌಕರರ ಬೇಜವಾಬ್ದಾರಿಯಿಂದಾಗಿ ಹಾಲು ಉತ್ಪಾದಕರಿಗೆ ಮಾರುಕಟ್ಟೆಗೆ ತೊಂದರೆಯಾಗಿದ್ದು, ಸಾಲ ಮರು ಪಾವ್ತಿಗೆ ದಾರಿ ಕಾಣದಾಗಿದೆ; ಇನ್ನಾದರೂ ಮೇಲಧಿಕಾರಿಗಳು ಕ್ಷೇತ್ರದಲ್ಲಿ ಸರಿಯಾದ ವ್ಯವಸ್ಥೆ ಮಾಡಬೇಕು—ಎಂದು ಮೊಹಿಯುದ್ದೀನ್ ಒತ್ತಾಯಿಸಿದ್ದಾರೆ.

**ಕ್ರಮ ತೆಗೆದುಕೊಳ್ಳಬೇಕು**

ಮಲೆನಾಡಿನ ಈ ಭಾಗದಲ್ಲಿ ಹೈನುಗಾರಿಕೆಯ ವಿಪುಲ ಅವಕಾಶ ಕಂಡಾಗ ಹಾಸನದ ಹೈನುಗಾರಿಕೆ ಕೇಂದ್ರದ ನೆರಳಲ್ಲಿ ಯೋಜನೆ ಸಿದ್ಧವಾಗಿ, ಅದೇ ನೆಪದಲ್ಲಿ ಆಗಿನ ಮಂತ್ರಿ ಬೇಗಾನೆ ರಾಮಯ್ಯ ಡೆನ್ಮಾರ್ಕ್ ಮುಂತಾದ ವಿದೇಶಗಳಿಗೆ ಹೋಗಿ ಬಂದರು. ತರಾತುರಿಯಲ್ಲಿ, ಜವಾಬ್ದಾರಿ–ದೂರದೃಷ್ಟಿಗಳಿಲ್ಲದೆ ಜಾರಿಗೊಂಡ ಯೋಜನೆ ಯಂತೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ ಆರ್ಥಿಕವಾಗಿ ದುರ್ಬಲರಾದವರಿಗೆ ಬ್ಯಾಂಕ್ ಸಾಲದ ಮೂಲಕ ಎಮ್ಮೆ–ದನಗಳನ್ನು ಕೊಡಿಸಿ, ಹಾಗೂ ಸಾರ್ವಜನಿಕರಿಗೂ ಉತ್ತೇಜನ ಕೊಟ್ಟು, ಅವರು ಉತ್ಪಾದಿಸುವ ಹಾಲನ್ನು ಸಂಗ್ರಹಿಸಿ, ಶೈತ್ಯೀಕರಿಸಿ ಹಾಸನಕ್ಕೆ ರವಾನಿಸಲು ಬಾಳೆಹೊನ್ನೂರಲ್ಲಿ ಈ ಕೇಂದ್ರ ಸ್ಥಾಪನೆಯಾಯಿತು.

(೪ನೇ ಪುಟಕ್ಕೆ)

---

ಮುದ್ರಣ ಸಹಾಯಕರಿಲ್ಲದಿರುವ ತೊಂದರೆಯ ಜೊತೆಗೆ, ಅಚ್ಚಿನ ವೇಳೆ ಆದ ಕಿರು ಅಪಘಾತದಿಂದಾಗಿ ೩ ದಿನದ ಕೆಲಸ ದಂಡವಾಗಿ ಈ ಸಂಚಿಕೆ ಬಹಳ ತಡವಾಗಿದೆ—ಸಂ.

---

## ಕನ್ನಡದಲ್ಲಿ ಉತ್ತರ ಬರೆದು ಐಎಎಸ್ ಪಾಸಾದ ಧೀರ!

ಭದ್ರಾವತಿಯ ಸರ್ ಎಂ. ವಿಶ್ವೇಶ್ವರಯ್ಯ ಕಾಲೇಜಿನಲ್ಲಿ ೭ ವರ್ಷಗಳಿಂದ ಗಣಿತ ಉಪನ್ಯಾಸಕರಾಗಿರುವ ಡಿ. ಸಿ. ಶ್ರೀಧರ್ ೧೯೮೨ರಲ್ಲಿ ನಡೆದ ಐ. ಎ. ಎಸ್. ಪರೀಕ್ಷೆಯಲ್ಲಿ ಇಂಗ್ಲೀಷ್ ಪ್ರಶ್ನೆಗಳಿಗೆ ಕನ್ನಡದಲ್ಲಿ ಉತ್ತರ ಬರೆದು ತೇರ್ಗಡೆಯಾಗಿದ್ದಾರೆ.

ಈ ಪರೀಕ್ಷೆಯಲ್ಲಿ ಪ್ರಾಂತೀಯ ಭಾಷೆಯಲ್ಲಿ ಉತ್ತರಿಸಬಹುದಾದರೂ ಕನ್ನಡದಲ್ಲಿ ಪಠ್ಯ ಪುಸ್ತಕಗಳಿಲ್ಲ. ಅಂತಹದರಲ್ಲಿ ಇವರ ಸಾಧನೆ ದೊಡ್ಡದೇ.

ಮಲೆನಾಡಿನ ಗಂಡುಮೆಟ್ಟಿನ ಕನ್ನಡ ನೆಲ ತೀರ್ಥಹಳ್ಳಿಯವರಾದ, ಕನ್ನಡ ತಾಯಿಯ ಈ ಹೆಮ್ಮೆಯ ಧೀರ ಕುವರನಿಗೆ ಇದೊ, ಅಪ್ಪಟ ಕನ್ನಡ ನಮಸ್ಕಾರ!

---

## ಕೊಪ್ಪ ಲಯನ್ಸ್ ಕ್ಲಬ್‌ನಲ್ಲಿ ಪದಗ್ರಹಣ ಸಮಾರಂಭ

ಕೊಪ್ಪ: ಇಲ್ಲಿನ ಲಯನ್ಸ್ ಕ್ಲಬ್‌ನ ಹೊಸ ಪದಾಧಿಕಾರಿಗಳ ಪದಗ್ರಹಣ ಸಮಾರಂಭ ಜು. ೨೧ ರಂದು ಲಯನ್ ಡಾ. ಶಾಂತಿಭಾಗ್‌ರವರ ಅಧ್ಯಕ್ಷತೆಯಲ್ಲಿ ನಡೆಯಿತು. ಮಾಜಿ ಲಯನ್ಸ್ ಗವರ್ನರ್ ಆದ ಬೆಂಗಳೂರಿನ ಲಯನ್ ಪಿ. ಎಸ್. ರಂಗನಾಥನ್ ಮುಖ್ಯ ಅತಿಥಿಗಳಾಗಿದ್ದರು. ಡಾ. ಶಾಂತಿಭಾಗ್ ಮತ್ತು ಶಿರೀಶ್ ಪಿ. ಗುರ್ಜರ್ ಅವರಿಂದ ಅಧ್ಯಕ್ಷ ಮತ್ತು ಕಾರ್ಯದರ್ಶಿ ಸ್ಥಾನಗಳನ್ನು ಮನಮೋಹನ ಆರ್. ಶೆಟ್ಟಿ ಮತ್ತು ಟಿ ಎ. ಪಿಂಟೋ ಅವರುಗಳು ವಹಿಸಿಕೊಂಡರು.

## ಕೈಹಿಡಿಯಿಲ್ಲದ ಸೇತುವೆ: ಬಾಲಕಗೆ ಅಪಘಾತ

ಕುದ್ರೆಗುಂಡಿ: ಇಲ್ಲಿಂದ ಕೊಪ್ಪಕ್ಕೆ ಹೋಗುವ ಲೋಕೋಪಯೋಗಿ ಇಲಾಖೆಯ ರಸ್ತೆಯಲ್ಲಿ ಕಪಿಲಾ ಹಳ್ಳಕ್ಕೆ [illegible] ವ ಕಿರಿದಾದ ಸೇತುವೆಗೆ ಕೈಹಿಡಿ ಇಲ್ಲದೆ ಬಹಳ ಅಪಾಯಕರವಾಗಿದೆ.

ಜುಲೈ ೯ರಂದು ಸ್ಕೂಲ್ಲಿನಲ್ಲಿ ಶಾಲೆಗೆ ಹೋಗುತ್ತಿದ್ದ ೧೩ ವರ್ಷದ ಹುಡುಗನೊಬ್ಬ ಸೇತುವೆಯಿಂದ ಕೆಳಗೆ ಬಿದ್ದು, ತಲೆಗೆ ತೀವ್ರವಾಗಿ ಆಘಾತವಾಗಿ ಮಣಿಪಾಲ ಆಸ್ಪತ್ರೆಯಲ್ಲಿ ೧೦ ದಿನಗಳಕಾಲ ಪ್ರಜ್ಞಾಶೂನ್ಯನಾಗಿದ್ದು, ಇನ್ನೂ ಸಾವು–ಬದುಕಿನ ಹೋರಾಟದಲ್ಲೇ ಚಿಕಿತ್ಸೆ ಪಡೆಯುತ್ತಿದ್ದಾನೆಂದು ತಿಳಿದು ಬಂದಿದೆ.

ಈ ಸೇತುವೆ ದುರಸ್ತಿಗಾಗಿ ತಲಮಕ್ಕಿ ಗ್ರಾಮ ಪಂಚಾಯ್ತಿ ಲೋಕೋಪಯೋಗಿ ಇಲಾಖೆಗೆ ಮಾಡಿರುವ ಮನವಿಗಳಿಂದ ಈ ವರೆಗೂ ಪ್ರಯೋಜನವಾಗಿಲ್ಲವೆನ್ನಲಾಗಿದೆ.

---

## ಯಶಸ್ವಿ ರಸ್ತೆ ತಡೆ ಚಳುವಳಿ: ನಿಂತ ಬಸ್ಸುಗಳ ಓಡಾಟ ಶುರು

(ನಮ್ಮ ಪ್ರತಿನಿಧಿಯಿಂದ)

ನಿಲುವಾಗಿಲು: ನಿಲುವಾಗಿಲು ಮತ್ತು ಶಾಸುಮ್ಮ ರೈತ ಸಂಘಗಳ ನೇತೃತ್ವದಲ್ಲಿ ಜುಲೈ ೧೭ರಂದು ಇಲ್ಲಿ ಯಶಸ್ವಿ ರಸ್ತೆ ಚಳುವಳಿಯೊಂದು ನಡೆಯಿತು.

ಮಳೆಗಾಲ ಪ್ರಾರಂಭವಾದಾಗ ಶಂಕರ್ ಕಂಪನಿಯವರು ೩ ಬಸ್ಸುಗಳನ್ನು ನಿಲ್ಲಿಸಿದ್ದು ಹಾಗೂ ಬಸ್ಸುಗಳು ಸಮಯಕ್ಕೆ ಸರಿಯಾಗಿ ಓಡಾಡದಿರುವುದನ್ನು ಪ್ರತಿಭಟಿಸಿ, ೮ ದಿನಗಳಲ್ಲಿ ಸೂಕ್ತ ವ್ಯವಸ್ಥೆ ಮಾಡದಿದ್ದಲ್ಲಿ ಜು. ೧೭ರಿಂದ ಮುಂದಿನ ಕ್ರಮ ಕೈಗೊಳ್ಳುವುದಾಗಿ 'ನೋಟೀಸು' ಕೊಡಲಾಗಿತ್ತು. ಇದಕ್ಕೆ ಕಂಪನಿಯವರಿಂದ ಉತ್ತರ ಬಾರದ್ದರಿಂದ ರೈತರು ಜುಲೈ ೧೭ ರಂದು ಕೆಲವು ಬಸ್ಸುಗಳನ್ನು ತಡೆದರು. ರಸ್ತೆ ತಡೆಯಿಂದ ತಪ್ಪಿಸಿಕೊಳ್ಳಲು ಮಿನಿ ಬಸ್ಸೊಂದನ್ನು ಕ[illegible] ಮಾರ್ಗವಾಗಿ ಓಡಿಸಲು ಪ್ರಯತ್ನಿಸಿದಾಗ ಕೈತಡೆಯುವವರು ಅದನ್ನು ತಡೆದು ಮಾಮೂಲಿ ಮಾರ್ಗದಲ್ಲಿ ತೆಗೆದುಕೊಂಡು ಹೋಗುವಂತೆ ಮಾಡಿದರು. (ಅದು ನಿಲುವಾಗಿಲಲ್ಲಿ ತಡೆಗೆ ಒಳಗಾಯಿತು.)

ಅಷ್ಟರಲ್ಲಿ ಇದರ ಪೂರ್ವ ಮಾಹಿತಿ ಪಡೆದಿದ್ದ ಕೊಪ್ಪ ಪೋಲೀಸ್ ಸಬ್ ಇನ್ಸ್‌ಪೆಕ್ಟರ್ ಮತ್ತು ಸಬ್ ಇನ್ಸ್‌ಪೆಕ್ಟರು ಸ್ಥಳದಲ್ಲಿ ಹಾಜರಿದ್ದು ರೈತರನ್ನು ಸಮಾಧಾನಪಡಿಸಿ, ಜು. ೧೮ರೊಳಗೆ ಮಾಮೂಲಿನಂತೆ [illegible]

(೪ನೇ ಪುಟಕ್ಕೆ)

## ವೇದಿಕೆ

### ತಮ್ಮ ಕಾರ್ಖಾನೆಗಳಿಗಾಗಿ ಕಾಡು ಬೆಳೆಸಲು

# ಅರಣ್ಯಭೂಮಿ ಖಾಸಗಿಯವರಿಗೆ ಕೊಡಬೇಡಿ

'ಮುಂಜಾವು' ೨೬-೬-೮೩ರ ಸಂಚಿಕೆಯಲ್ಲಿ 'ನೈಸರ್ಗಿಕ ಅರಣ್ಯದ ಮೇಲೆ ಕೈಗಾರಿಕೆಗಳವರ ಅವಲಂಬನೆ ಹಾಗೂ ಒತ್ತಡವನ್ನು ತಪ್ಪಿಸುವ ಸಲುವಾಗಿ, ಕೈಗಾರಿಕೆಗಳವರಿಗೆ ಸ್ವಂತವಾಗಿ ಅರಣ್ಯ ಬೆಳೆಸಲು, ಕೃಷಿ ಯೋಗ್ಯವಲ್ಲದ ಭೂಮಿ ನೀಡುವ ಕುರಿತು ಸರ್ಕಾರ ಆಲೋಚಿಸುತ್ತಿದೆ' ಎಂಬುದಾಗಿ ಅರಣ್ಯ ಸಚಿವ ಜೀವಿಜಯ ತಿಳಿಸಿದ್ದಾಗಿ ವರದಿಯಾಗಿರುವುದು ಸರಿಯಷ್ಟೆ. ಹಾಗೇ 'ಈ ಕ್ರಮವನ್ನು ರೈತರು ವಿರೋಧಿಸ ಬಾರದು. ಸರ್ಕಾರವೇ ಅರಣ್ಯ ಬೆಳೆಸಬೇಕೆಂದರೆ ಸಾಧ್ಯವಾಗುವ ಮಾತಲ್ಲ. ಅದಕ್ಕಾಗಿ ಈ ಕ್ರಮ ಅನುಸರಿಸುತ್ತಿದ್ದೇವೆ.' ಎಂದು ಹೇಳಿರುವುದಾಗಿ ಇನ್ನೊಂದೆಡೆ ವರದಿಯಾಗಿದೆ.

ಇದನ್ನು ರೈತರು ಏಕೆ ವಿರೋಧಿಸ ಬಾರದು? ಎಂದು ಪ್ರಶ್ನಿಸ ಬೇಕಾಗಿದೆ.

ಸರ್ಕಾರ ಎಷ್ಟೇ ಸದುದ್ದೇಶದಿಂದ ರೂಪಿಸಿದ ಯೋಜನೆಗಳಾದರೂ ಭ್ರಷ್ಟ ಅಧಿಕಾರಿಗಳ ಹಾಗೂ ಲಾಭಬಡುಕರ ಕುತಂತ್ರಗಳಿಂದಾಗಿ ವಿಫಲಗೊಂಡಿರುವುದನ್ನು ನಾವು ಈಗಾಗಲೇ ಕಂಡಿದ್ದೇವೆ. ಅರಣ್ಯವನ್ನು ಅವಲಂಬಿಸಿರುವ ಕೈಗಾರಿಕೆಗಳವರಿಗೆ ಅರಣ್ಯ ನಾಶ ಮಾಡಲು ಅವಕಾಶವಿತ್ತು ಸರ್ಕಾರ ಈಗಾಗಲೇ ಸಾಕಷ್ಟು ತಪ್ಪು ಮಾಡಿದೆ. (ಉದಾ: 'ವಿಸ್ಕೋಸ್') ಹೇಳುವುದರೆ, ನಮ್ಮ ರಾಜ್ಯದಲ್ಲಿನ ಅರಣ್ಯ ನಾಶವಾಗುವ ಪರಿವೆ ಇಲ್ಲದೆ 'ಹರಿಹರ ಪಾಲಿಫೈಬರ್' ನಂಥ ಕಾರ್ಖಾನೆಗಳ ಸ್ಥಾಪನೆಗೆ ಅನುಮತಿ ನೀಡಿದ್ದೇ ತಪ್ಪು. ಹಾಗೆ ಅನುಮತಿ ನೀಡುವಾಗ, ಟನ್ನಿಗೆ ೫೦ ರೂ. ಬೆಲೆಯಲ್ಲಿ ನೀಲಗಿರಿ ಮರ ಒದಗಿಸುತ್ತೇವೆಂಬ ದೀರ್ಘಾವಧಿ ಕರಾರಿಗೆ ಒಪ್ಪಿದ್ದು ಎರಡನೆಯ ತಪ್ಪು. ಹಾಗೆ ಕರಾರಿಗೆ ಒಪ್ಪಿದ ಮೇಲೆ ಅವರಿಗೆ ಸಾಕಾಗುವಷ್ಟು ನೀಲಗಿರಿ ಮರ ಬೆಳೆಸದೇ ಇದ್ದುದು ಮೂರನೇ ತಪ್ಪು. ಈಗ ಖಾಸಗೀ ಕಂಪೆನಿಗಳವರಿಗೆ ಭೂಮಿ ನೀಡಲು ಯೋಚಿಸಿದರೆ, ಯೋಜನೆಯ ಜಾರಿಯ ಅವಧಿಯಲ್ಲಾಗಬಹುದಾದ ದೋಷಗಳಿಂದಾಗಿ ಮತ್ತೊಂದು ತಪ್ಪು ಮಾಡಿದಂತಾಗಲಾರದೆ?

ಕಾನೂನು ರಚಿಸುವಾಗ ಕೃಷಿಗೆ ಯಾವರೀತಿಯಿಂದಲೂ ಯೋಗ್ಯವಲ್ಲದ ಭೂಮಿ ನೀಡುತ್ತೇವೆ ಎಂಬ ಉದ್ದೇಶವಿದ್ದರೂ, ಅದು ಜಾರಿಯಾಗುವಾಗ ಭ್ರಷ್ಟ ಅಧಿಕಾರಿಗಳಿಂದಾಗಿ, ಕಟ್ಟುನಿಟ್ಟಾಗಿ ಜಾರಿಯಾಗಲಾರದು. ಅಲ್ಲದೆ ಈಗ ನಮ್ಮ ಜಿಲ್ಲೆಯಲ್ಲಿ ಸಾಗುವಳಿ ಭೂಮಿಗಿಂತ ಕೃಷಿಯೇತರ ಭೂಮಿ ಹೆಚ್ಚಾಗಿರುವುದರಿಂದ ಒಟ್ಟಾರೆ ಭೂಮಿಯ ಒಡೆತನ ರೈತರಿಗಿಂತ, ಕೈಗಾರಿಕೋದ್ಯಮಿಗಳ ಕೈಗೆ ಹೆಚ್ಚಾಗಿ ಬರುತ್ತದೆ. ಹಾಗೆ ಬಂದರೆ ದುರಾಸೆಗೆ ಮಿತಿಯಿಲ್ಲದ ಕೈಗಾರಿಕೋದ್ಯಮಿಗಳು ಆಸುಪಾಸಿನ ಬಡವರ ಭೂಮಿಯನ್ನೂ ಸ್ವಲ್ಪಸ್ವಲ್ಪವಾಗಿಯಾದರೂ ಕಬಳಿಸುವುದಂತೂ ಖಂಡಿತ (ಇದಕ್ಕೆ ಚಿಕ್ಕಮಗಳೂರಿನ ಕಾಫಿ ತೋಟಗಳಲ್ಲಿ ಉದಾಹರಣೆಗಳು ಸಿಗಬಹುದು) ಅಂಥ ಸಂದರ್ಭಗಳಲ್ಲಿ, ಅವರನ್ನೆದುರಿಸಿ ಭೂಮಿಯನ್ನು ಉಳಿಸಿಕೊಳ್ಳುವುದು ನಮ್ಮಂಥ ಜಡ ದೇಶದ ಬಡ ಜನರಿಗೆ ಸುಲಭವೂ ಅಲ್ಲ.

ಆದ್ದರಿಂದ, ಸರ್ಕಾರವೇ ಅರಣ್ಯ ಬೆಳೆಸಬೇಕು. ಸರ್ಕಾರದಿಂದ ಆಗುವುದಿಲ್ಲ ಎಂದರೆ ಅದಕ್ಕಿಂತ ನಾಚಿಕೆ ಗೇಡಿನ ಸಂಗತಿ ಬೇರೆ ಇಲ್ಲ. ಹಾಗೆಯೇ ಅರಣ್ಯಬೆಳೆಸಲು ಸರಕಾರದೊಂದಿಗೆ ಸಾರ್ವಜನಿಕರೂ ರೈತರೂ ಸಹಕರಿಸಬೇಕು. ಈಮಾತನ್ನು ಒತ್ತಿಹೇಳಬೇಕಾದ ಸಂದರ್ಭ ಏಕೆ ಬಂದಿದೆಯೆಂದರೆ, ಅರಣ್ಯಬೆಳೆಸುವ ಸರಕಾರದ ಯತ್ನ ವಿಫಲವಾಗುತ್ತಿರುವುದಕ್ಕೆ ಅನೇಕ ಸಂದರ್ಭಗಳಲ್ಲಿ ಸ್ಥಳೀಯ ರೈತರು, ಸಾರ್ವಜನಿಕರೇ ಕಾರಣರಾಗಿದ್ದಾರೆ.

ಹಾಗೊಂದು ವೇಳೆ ಅರಣ್ಯ ಬೆಳೆಸಲು ಸರ್ಕಾರಕ್ಕೆ ವಿಪರೀತ ಖರ್ಚು ಬರುವುದೆಂದಾದರೆ, **ಯಾವರೀತಿಯ ಪೂರ್ವಗ್ರಹಕ್ಕೂ ಒಳಗಾಗದೆ** ಸರ್ಕಾರ, ನೇರವಾಗಿ **ರೈತರು ಮತ್ತು** ಕೃಷಿಕಾರ್ಮಿಕರಿಗೇ ಅರಣ್ಯ ಬೆಳೆಸುವ ಉದ್ದೇಶಕ್ಕಾಗಿ ಭೂಮಿ **ನೀಡಲಿ**. ಅಷ್ಟೇ ಅಲ್ಲ, ಯಾವನೇ ರೈತ ಅಂಥ ಭೂಮಿಯನ್ನು ಬೇರೆ ಯಾವುದಾದರೂ ಬೆಳೆ ತೆಗೆಯಲು ಬಳಸಿದಲ್ಲಿ ನಿರ್ದಾಕ್ಷಿಣ್ಯವಾಗಿ ಮುಟ್ಟುಗೋಲು ಹಾಕಿಕೊಳ್ಳಲಿ. ಹಾಗೆ ಮರ ಬೆಳೆಸುವ ಬಗ್ಗೆ ರೈತರಿಗೆ ತಿಳುವಳಿಕೆಯನ್ನು ಕೊಡಬೇಕು. **ಕೈಗಾರಿಕೋದ್ಯಮಿಗಳಿಗಂತೂ ಖಂಡಿತ ಕೊಡಕೂಡದು.** ಹಾಗೆ ಭೂಮಿ ನೀಡುವಾಗ ತಲಾ ಒಂದು ಎಕರೆ ಎಂದು ನಿಗದಿಗೊಳಿಸಿದಲ್ಲಿ ಹೆಚ್ಚು ಮುತುವರ್ಜಿಯಿಂದ ಬೆಳೆಸಲು ಸಾಧ್ಯವಾಗುತ್ತದೆ.

ಈ ಬಗ್ಗೆ ರೈತರು ಆಳವಾಗಿ ಯೋಚಿಸಿ ತೀರ್ಮಾನಿಸಿ ಕೊಳ್ಳಬೇಕು. ರೈತ ಸಂಘವೂ ಕೂಡ ಈಬಗ್ಗೆ ಸರ್ಕಾರವನ್ನು ಪರಿಣಾಮಕಾರಿಯಾಗಿ ಒತ್ತಾಯಿಸಬೇಕು. ಹಾಗಲ್ಲದಿದ್ದಲ್ಲಿ ಮುಂದೆ ಬಯಸಿದರೂ ಸರಿಪಡಿಸಲಾಗದಂಥ ಸನ್ನಿವೇಶದ ನಿರ್ಮಾಣವಾದೀತು. §§

ಎಲ್. ಎನ್. 'ಮಧ್ಯಸ್ಥ'
ಶೃಂಗೇರಿ.

---

## ಜಿಜ್ಞಾಸೆ

# ಕಿವಿಗೆ ಕಾದ ಸೀಸ: ಒಂದು ವಿಶ್ಲೇಷಣೆ

ಬೆಂಗಳೂರಿನ ಬ್ರಾಹ್ಮಣ ಸಮ್ಮೇಳನದಲ್ಲಿ ಭಾಗವಹಿಸಿದ್ದ ನಾನು ಅಲ್ಲಿ ಶೃಂಗೇರಿ ಜಗದ್ಗುರು ಶ್ರೀ ಭಾರತೀತೀರ್ಥರು ಮಾಡಿದ ಭಾಷಣವನ್ನೂ ಅದು ಮುಗಿದೊಡನೆ ಶ್ರೀ ಶಂಕರ ಮಠದಲ್ಲಿ "ಸಂಸ್ಕೃತ ಮಹಾವಿದ್ಯಾಲಯ"ದ ಪ್ರಾರಂಭೋತ್ಸವದಲ್ಲಿ ಮಾಡಿದ ಭಾಷಣವನ್ನೂ ಪೂರ್ತಿಯಾಗಿ ಕೇಳಿದ್ದೇನೆ. ಶ್ರೀಗಳವರ ಮೊದಲನೇ ಭಾಷಣದ ಬಗ್ಗೆ "ಹೊಲೇರ ಸಿದ್ದ, ಶೃಂಗೇರಿ" ಎಂಬ ಅಂಕಿತದಲ್ಲಿ ಜೂನ್ ೧೯ 'ಮುಂಜಾವು' ನಲ್ಲಿ ಪ್ರಕಟವಾದ "ನಮ್ಮ ಕಿವಿಗೆ ಕಾದ ಸೀಸ ಹುಯ್ತಾರ?" ಎಂಬ ಅನಿಸಿಕೆಗೆ ಈ ೨ ಭಾಷಣಗಳ ಸಂಬಂಧ ನಿಕಟವಾಗಿರುವುದರಿಂದ ಈ ವಿಷಯದ ವಿಶ್ಲೇಷಣೆಮಾಡಲು ಪ್ರಯತ್ನಿಸುತ್ತಿದ್ದೇನೆ.

ಮೇಲ್ಕಂಡ ಅನಿಸಿಕೆಯ ವಿವರಗಳನ್ನು ನೋಡಿದಾಗ ಇದು "ಹುಲಿಯ ಚರ್ಮ ಹೊದ್ದ .... ಯಂತೆ ಹೊಲೇರ ಸಿದ್ದನನ್ನು ತಮ್ಮ ಮೇಲೆ ಆಚ್ಛಾದಿಸಿ ಕೊಂಡ ಕುಹಕ ಬುದ್ಧಿಯವರ ಕುಟಿಲತನ ಎನ್ನುವುದು ಸುಸ್ಪಷ್ಟ. ಅದಿಲ್ಲದೆ ನಿಜವಾದ ಹೊಲೆಯರೇ ಆಗಿದ್ದರೆ ಇಷ್ಟೆಲ್ಲಾ ಧರ್ಮ–ಶಾಸ್ತ್ರಜ್ಞಾನ ಉಂಟಾಗುವಷ್ಟು ವಿದ್ಯೆ ಓದುವಾಗ ಯಾವ ಪೀಠಾಧಿಪತಿಗಳೂ ಅವರಿಗೆ ಯಾವ ಚಿತ್ರಹಿಂಸೆಯನ್ನೂ ಕೊಟ್ಟಿಲ್ಲವಾದ್ದರಿಂದ, ಭಯಾನಕ –ಭ್ರಾಮಕ–ಚಿತ್ರಹಿಂಸೆಯ ಚಿತ್ರಣ ಕಲ್ಪಿಸಿಕೊಂಡು ಕನಸಿನಲ್ಲಿ ಬೆಚ್ಚಿಬಿದ್ದಂತೆ ಮಾಡುತ್ತಿರಲಿಲ್ಲ.

ಇನ್ನು ಅಸ್ಪೃಶ್ಯರು ವಿದ್ಯೆ ಓದುವುದರ ಬಗ್ಗೆ ಧರ್ಮ ಶಾಸ್ತ್ರ ಪ್ರಚಾರ ನಿಸರ್ಗದ ಶೃಂಗೇರಿ ಪೀಠಾಧೀಶರ ಅಭಿಪ್ರಾಯ ಈಗಿನ ಪರಿಸ್ಥಿತಿಗೆ ಸಂಪೂರ್ಣ ಅನುಕೂಲಕರವಾಗಿದೆಯೆಂಬುದು ಅಂದು ಅವರು ಶಂಕರಮಠದಲ್ಲಿ ಮಾಡಿದ ಭಾಷಣದಿಂದ ಸ್ಪಷ್ಟಗೊಂಡಿದೆ. ಸಮಾರಂಭದಲ್ಲಿ ಪ್ರಾರಂಭೋತ್ಸವ ನೆರವೇರಿಸಿದ ಸಚಿವ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು 'ಸಂಸ್ಕೃತ ಶಿಕ್ಷಣ ಎಲ್ಲರಿಗೂ ದೊರೆಯುವುದು ಅಗತ್ಯ' ಎಂಬ ಅಭಿಪ್ರಾಯ ಪಟ್ಟುದನ್ನು ಶ್ರೀ ಶ್ರೀ ಗಳವರು ತಮ್ಮ ಭಾಷಣದಲ್ಲಿ ಮರೆಯದೆ ಪ್ರಸ್ತಾಪಿಸಿ, ಯಾವ ಭೇದ-ಭಾವನೆಯೂ ಇಲ್ಲದೆ ಎಲ್ಲರಿಗೂ ಸಂಸ್ಕೃತ ವಿದ್ಯೆ ದೊರೆಯಲೆಂದು ಶೃಂಗೇರಿ ಪೀಠದವರು ಹಿಂದೆಯೇ ಅಲ್ಲಲ್ಲಿ 'ಸುರ ಸರಸ್ವತೀ- ಸಭಾ' ವ್ಯವಸ್ಥೆಗೊಳಿಸಿರುವುದನ್ನೂ, ಈಗಲೂ ಆಸಕ್ತಿಯಿರುವವರು ಸೇರಿ ತಮ್ಮ ಸ್ಥಳದಲ್ಲಿ ಇದನ್ನು ಏರ್ಪಡಿಸಿಕೊಂಡು ಪ್ರಯೋಜನ ಪಡೆಯಬಹುದೆಂಬುದನ್ನೂ ಖಚಿತವಾಗಿ ಹೇಳಿದ್ದಾರೆ.

ವಿದ್ಯೆ–ಜ್ಞಾನ ಉಳ್ಳವ ಚಾಂಡಾಲನಾಗಿರಲಿ! ಬ್ರಾಹ್ಮಣನಾಗಿರಲಿ! ಅವನು ನನಗೆ ಗುರು! ಎಂದು ೧೨೦೦ ವರ್ಷದ ಹಿಂದೆ ಸಾರಿ ಹೇಳಿದವರು ಆದಿ ಗುರು ಶಂಕರಾಚಾರ್ಯರು. ಅವರ ಉತ್ತರಾಧಿಕಾರಿಗಳಾದ ಶೃಂಗೇರಿಯ ಪೀಠಾಧೀಶರು ಇಂದು ವಿದ್ಯೆ ಓದುವ ಅಂತ್ಯಜನ ನಾಲಿಗೆ ಕತ್ತರಿಸಲು ಧರ್ಮಶಾಸ್ತ್ರಾಚರಣೆಯ ವ್ಯಾಜದಿಂದ ಕುಮ್ಮಕ್ಕು ಕೊಡುತ್ತಾರೆಂಬ ಸಂದೇಹ–ಭಯ ಪ್ರದರ್ಶನ ಒಂದೋ ಹೊಟ್ಟೆ ಕಿಚ್ಚಿನಿಂದ ಹುಟ್ಟಿದ ಕುಟಿಲತನದ್ದಿರಬೇಕು, ಇಲ್ಲವೇ ಕೇವಲ ಬಾಲಿಶತನದ್ದಾಗಿರಬೇಕು.

ನನ್ನ ಈ ಲೇಖನದ ಬಗ್ಗೆ ಯಾವುದೇ ಟೀಕೆ ಬಂದರೂ ಅದಕ್ಕೆ ನನ್ನ ಪ್ರತಿಟೀಕೆ ಏನೂ ಇರುವುದಿಲ್ಲ.

—ಸುಬ್ರಾಮಣ್ಯ

[ಸ್ಥಳಾಭಾವದ ಕಾರಣ ಈ ಪತ್ರದ ಪ್ರಕಟಣೆ ತಡವಾಗಲಿದ್ದುದರಿಂದ ಅದರ ನಕಲನ್ನು ಮೂಲ ಪತ್ರ ಬರೆದವರ ಪ್ರತಿಕ್ರಿಯೆಗಾಗಿ ಕಳಿಸಲಾಗಿತ್ತು. ಶ್ರೀ ಸಿದ್ದ ಅವರ ಪ್ರತಿಕ್ರಿಯೆಯನ್ನೂ ಒಟ್ಟಿಗೆ ಪ್ರಕಟಿಸಿದೆ.–ಸಂ]

# "ಮನಸ್ಸು ತೆರೆದಿಟ್ಟುಕೊಂಡು, ನಿಜಸ್ಥಿತಿ ನೋಡಿ ಹೇಳಿ"

ನನ್ನ ಪತ್ರ 'ಕುಹಕ ಬುದ್ಧಿಯ ಕುಟಿಲತನದ ಯಾರೋ ಬರೆದದ್ದು, ನಿಜವಾದ ಹೊಲೆಯರದಲ್ಲ' ಎಂದು ಲೇಖಕರಿಗೆ ಯಾಕೆ ಅನ್ನಿಸಿತೋ. ನಾವು ಹೊಲೆಯರು ಹೀಗೆಲ್ಲ ಯೋಚನೆ ಮಾಡಿಯೇವು ಎಂದು ಯೋಚಿಸಲು ಅವರಿಗೆ ಸಾಧ್ಯವಾಗದಿರುವುದೇ ಇದಕ್ಕೆ ಕಾರಣವೇನೋ. ನಿಜವಾಗಿ, ನೋಡಿದರೆ, ನಮ್ಮ ಪೂರ್ವಿಕರು 'ಇದೆಲ್ಲ ನಮ್ಮ ಕರ್ಮ. ಇದು ಹೀಗೆ ಇರಬೇಕಾದ್ದೇ' ಎಂದು ತಮ್ಮ ಅಸ್ಪೃಶ್ಯತನವನ್ನು ಮನಃಪೂರ್ವಕ ಒಪ್ಪಿಕೊಂಡು 'ಶಾಂತಿಯಿಂದ' ಬದುಕಿದಂತೆ ಮೇಲುನೋಟಕ್ಕೆ ಕಂಡರೂ, ಅವರೂ ಹೆಚ್ಚುಕಡಿಮೆ ಹೀಗೇ ಎಲ್ಲ ಯೋಚಿಸುತ್ತಿದ್ದರು ಅನ್ನಿಸುತ್ತದೆ. ನಮ್ಮ ಅಜ್ಜಂದಿರ ಕಾಲದಲ್ಲೇ ಇಂಥ ವಿಚಾರಗಳನ್ನು ನಾನು ಕೇಳಿದ್ದೇನೆ.

ಅಥವಾ, ಅಸ್ಪೃಶ್ಯತೆ ಆಚರಿಸುವವರ ಮನಸ್ಸು 'ಯಾರಾದರೂ ತಮ್ಮ ಕೃತ್ಯಗಳನ್ನು ನೋಡಿ ಕುಹಕವಾಡುತ್ತಾರೇನೋ' ಎಂದು ಯಾವಾಗಲೂ ಹುಳ್ಳಹುಳ್ಳಗೆ ಹೊಂಚು ಹಾಕುತ್ತಿರುತ್ತದೇನೋ. ಇಲ್ಲವಾದರೆ –ನನ್ನ ಪತ್ರದಲ್ಲಿ, ಧರ್ಮಶಾಸ್ತ್ರಗಳನ್ನು **ನಾನು** ಓದಿದ್ದೇನೆಂದು ನಾನುಹೇಳಿಲ್ಲ ಓದಿದವರು ಹೀಗೆ ಅದರಲ್ಲಿ ಬರೆದಿಯೆದೆಂದು ಹೇಳುತ್ತಾರೆ ಎಂದು ಬರೆದಿದ್ದೇನೆ–ಈ ವಿಷಯ ಅವರ ಗಮನಕ್ಕೆ ಯಾಕೆ ಬರಲಿಲ್ಲ?

ಹೋಗಲಿ, ಲೇಖಕರು ನನ್ನ ಪತ್ರದ ಉದ್ದೇಶ, ಆಶಯವನ್ನಾದರೂ ಅರ್ಥ ಮಾಡಿಕೊಂಡಿದ್ದಾರೆಯೆ?

ಗುರುಗಳು ಮನುಧರ್ಮಶಾಸ್ತ್ರವನ್ನು ಒಂದು ಕಡೆ ಉದಹರಿಸಿ, ಅನಂತರ ಧರ್ಮಶಾಸ್ತ್ರವನ್ನು ಅನುಷ್ಠಾನ ಮಾಡಿಸುವ ಬಗ್ಗೆ ಹೇಳಿದ್ದರು. (ಪತ್ರಿಕಾ ವರದಿ) 'ಧರ್ಮಶಾಸ್ತ್ರವೆಂದರೆ ಯಾವುದು?' ಎಂದು ಕೇಳುತ್ತಾ, ನಮ್ಮನ್ನು ಈ ಸಮಾಜದ ಸೂತ್ರಧಾರಿಗಳು ಹೇಗೆ ನಡೆಸಿಕೊಳ್ಳಬೇಕೆಂದು ಈ ಧರ್ಮಶಾಸ್ತ್ರಗಳು ನಿರೂಪಿಸಿವೆಯೆಂಬುದರ ಕಡೆ ಬೆರಳು ಮಾಡಿದ್ದೆ. ಯಾಕೆಂದರೆ, ಇಂದು ನಾವು ಹೊಲೆಯರಾಗಿರಬೇಕಾದ್ದು ಧರ್ಮಶಾಸ್ತ್ರದ ಮೂಲಕವೇ. ಇಂದು ನಾವು ಹೊಲೆತನವನ್ನು ಒಪ್ಪದೆ ಪ್ರಶ್ನಿಸಿದಾಗ, ನಾವು ಮನುಷ್ಯರೆಂದು ಬದುಕಲು ಹೊರಟಾಗ ನಮ್ಮ ಮೇಲೆ ದೇಶಾದ್ಯಂತ

(ಓನೇ ಪುಟಕ್ಕೆ)

## ವನಮಹೋತ್ಸವ

ನಾರ್ವೆ: ಮರಗಳ ತೋಪು ಯೋಜನೆಯ ಆಶ್ರಯದಲ್ಲಿ ವನಮಹೋತ್ಸವವನ್ನು ಜುಲೈ-೨೧ ರಂದು ಇಲ್ಲಿನ ಪ್ರೌಢಶಾಲಾ ಆವರಣದಲ್ಲಿ ಶಾಸಕ ಹೆಚ್. ಜಿ. ಗೋವಿಂದಗೌಡರ ಅಧ್ಯಕ್ಷತೆಯಲ್ಲಿ ಆಚರಿಸಲಾಯ್ತು. ಇದೇ ಸಂದರ್ಭದಲ್ಲಿ ನರಸೀಪುರ ಪಂಚಾಯ್ತಿಯ ಶೇ. ೧೮ರ ಅನುದಾನದಿಂದ ಹರಿಜನ ವಿದ್ಯಾರ್ಥಿಗಳಿಗೆ ಛತ್ರಿಗಳನ್ನು ವಿಭಾಗ ಅರಣ್ಯಾಧಿಕಾರಿ ಕೆ. ಸುಂದರ ನಾಯ್ಕ ವಿತರಣೆ ಮಾಡಿದರು. ತಾಲ್ಲೂಕಿನ ಅಧಿಕಾರಿಗಳಾದ ಕೆ. ಬಾಲಣ್ಣಗೌಡ, ವೆಂಕಟಯ್ಯ, ದುಗ್ಗಪ್ಪಗೌಡ ಅವರುಗಳು ಸಭೆಯಲ್ಲಿ ಮಾತನಾಡಿದರು.

ಪಂಚಾಯ್ತಿ ಅಧ್ಯಕ್ಷ ಕೆ. ಎಸ್. ಕಾಡಪ್ಪಗೌಡ ಸ್ವಾಗತಿಸಿ, ಶಾಲಾ ಮುಖ್ಯೋಪಾಧ್ಯಾಯ ಯೋಗಪ್ಪ ವಂದಿಸಿದರು.

## ನಿರ್ದೇಶಕತ್ವ ಅನೂರ್ಜಿತ

ಚಿಕ್ಕಮಗಳೂರು: ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನ ಉಪಾಧ್ಯಕ್ಷ ಟಿ. ಆರ್. ಶಂಕರಹೆಗ್ಡೆ ಅವರ ಬ್ಯಾಂಕಿನ ನಿರ್ದೇಶಕತ್ವವನ್ನು ರದ್ದುಗೊಳಿಸಿ ಅವರನ್ನು ಒಂದು ವರ್ಷ ಕಾಲ ಸಹಕಾರಿ ಕ್ಷೇತ್ರದಿಂದ ಅನರ್ಹಗೊಳಿಸಲಾಗಿದೆಯೆಂದು ವರದಿಯಾಗಿದೆ. ಸಹಕಾರ ಸಂಘಗಳ ಜಂಟಿ ನಿಬಂಧಕರು ಈ ಆದೇಶ ನೀಡಿದ್ದು ಶಂಕರಹೆಗ್ಡೆ ಅವರು ಪ್ರತಿನಿಧಿಸುವ ಅತ್ತಿಕುಡಿಗೆ ಸಹಕಾರಸಂಘ ಸಮಯಕ್ಕೆ ಸರಿಯಾಗಿ ಸಾಲ ಹಿಂತಿರುಗಿಸಲು ತಪ್ಪಿದ್ದು ಸುಸ್ತಿ ಬಾಕಿದಾರ ಸಂಸ್ಥೆಯಾದುದು ಶಂಕರಹೆಗ್ಡೆಯವರ ನಿರ್ದೇಶಕತ್ವ ರದ್ದಾಗಲು ಕಾರಣವೆನ್ನಲಾಗಿದೆ.

ಅತ್ತಿಕುಡಿಗೆ ಸಹಕಾರಸಂಘ ಸಹ ಅನರ್ಹತೆ ಪಡೆದಿದೆ.

# ವಿವಿಧಕಡೆ ರೈತ ಹುತಾತ್ಮರ ದಿನಾಚರಣೆ

### ಬಿಳಲುಕೊಪ್ಪ

ಕರ್ನಾಟಕ ರಾಜ್ಯ ರೈತಸಂಘದ ಕರೆಯ ಮೇರೆಗೆ ರೈತಹುತಾತ್ಮರ ದಿನಾಚರಣೆ ಜು. ೨೧ ರಂದು ಇಲ್ಲಿ ರೈತಸಂಘದ ಬಿಳಲುಕೊಪ್ಪ ಪಂಚಾಯ್ತಿ ಘಟಕದ ಅಧ್ಯಕ್ಷ ಎಸ್. ಶ್ರೀಧರಮೂರ್ತಿ ಅವರ ನೇತೃತ್ವದಲ್ಲಿ ನಡೆಯಿತು. ಶ್ರೀ ಮುರಳೀಧರ ಲೋಚನರವರು ರೈತಸಂಘದ ಧ್ವಜಾರೋಹಣ ಮಾಡಿದರು. ಕಸಕಸಹಳ್ಳಿ ರಾಮಚಂದ್ರಯ್ಯ ಮತ್ತು ಕೆ. ವಿ. ವೆಂಕಟರಮಣಉಡುಪರು ರೈತರನ್ನು ಉದ್ದೇಶಿಸಿ ಮಾತನಾಡಿದರು. ನಾಲ್ಕು ಗ್ರಾಮಗಳ ರೈತರು ಮತ್ತು ರೈತ ಮಹಿಳೆಯರು ಉತ್ಸಾಹದಿಂದ ಭಾಗವಹಿಸಿದ್ದ, ಹುತಾತ್ಮರ ಹೆಸರಿನಲ್ಲಿ ಪ್ರಮಾಣವಚನ ಸ್ವೀಕರಿಸಿದರು.

### ಶಾನುವಳ್ಳಿ

ರೈತ ಸ್ವಾತಂತ್ರ್ಯ ಹೋರಾಟ ದಿನಾಚರಣೆ ಮತ್ತು ರೈತ ಹುತಾತ್ಮರ ಗೌರವಾರ್ಥ ಕು|| ಶಶಿಕಲ ಹಸಿರು ಧ್ವಜ ಹಾರಿಸಿದರು. ಶಾನುವಳ್ಳಿ ರೈತ ಸಂಘದ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ಮಧ್ಯಾಹ್ನ ನೂರಾರು ರೈತರು ಶಾಂತಿಸಭೆ ನಡೆಸಿ, ಹುತಾತ್ಮರ ಹೆಸರಿನಲ್ಲಿ ಪ್ರಮಾಣವಚನ ಸ್ವೀಕರಿಸಿದರು. ಮುಖ್ಯ ಅತಿಥಿ ಮಾಗ ಶ್ರೀನಿವಾಸ್ ರೈತ ಸಂಘಟನೆ ಬಗ್ಗೆ ಮಾತನಾಡಿದರು. ಕಾರ್ಯದರ್ಶಿ ಬಾಲಚಂದ್ರರಾವ್ ತಾಲ್ಲೂಕು ಸಭೆಯ ಕಾರ್ಯಕ್ರಮ ಮತ್ತು ತೀರ್ಮಾನಗಳ ಬಗ್ಗೆ ವಿವರ ನೀಡಿದರು. ಪ್ರಗತಿಪರ ರೈತರ ಭಾಷಣ ಮತ್ತು ಜಯ ಘೋಷಣೆಗಳೊಂದಿಗೆ ಸಭೆ ಮುಕ್ತಾಯ ವಾಯಿತು.

### ಕಲ್ಲುಗುಡ್ಡೆ

ಕೊಪ್ಪತಾ|| ಕಲ್ಲುಗುಡ್ಡೆ ಗ್ರಾಮದ ರೈತ ಸಮಿತಿಯ ಆಶ್ರಯದಲ್ಲಿ ನಡೆದ ಸಮಾರಂಭದಲ್ಲಿ ಸಾವಿತ್ರಿ ಎಸ್. ಶಂಕರ್ ಧ್ವಜಾರೋಹಣ ಮಾಡಿದರು. ಗ್ರಾಮದ ಹೆಚ್ಚಿನ ರೈತರು ಕಾರ್ಯಕ್ರಮದಲ್ಲಿ ಪಾಲ್ಗೊಂಡು ಪ್ರಮಾಣ ವಚನ ಸ್ವೀಕರಿಸಿ, ಕಳೆದ ಎರಡು ವರ್ಷಗಳ ರೈತ ಹೋರಾಟಗಳಲ್ಲಿ ಹುತಾತ್ಮರಾದ ೧೯ ರೈತ ಹೋರಾಟಗಾರರಿಗೆ ಶ್ರದ್ಧಾಂಜಲಿ ಅರ್ಪಿಸಿದರು. ಕಾರ್ಯದರ್ಶಿ ಜಿ. ಕೆ. ಶಿವಶಂಕರ್ ರೈತ ಚಳುವಳಿಯ ಕಿರು ಪರಿಚಯ ಮಾಡಿದರು. ಅಧ್ಯಕ್ಷ ಬಿ. ಲಕ್ಷ್ಮೀನಾರಾಣಪ್ಪ, ಉಪಾಧ್ಯಕ್ಷ ಬಿ. ಪಿ. ಸದಾಶಿವರಾವ್ ಕಾರ್ಯಕ್ರಮದ ಉಸ್ತುವಾರಿ ವಹಿಸಿದ್ದರು.

## ವಾಣಿಜ್ಯ ಪರೀಕ್ಷೆ: ಜಯಪುರ ಶಾಲೆಗೆ ಶೇ. ೫೬ ಫಲಿತಾಂಶ

ಜಯಪುರ: ಕಳೆದ ಮೇ ತಿಂಗಳಿನಲ್ಲಿ ನಡೆದ ಇಂಗ್ಲೀಷ್ ಬೆರಳಚ್ಚು ಪರೀಕ್ಷೆಯಲ್ಲಿ ಇಲ್ಲಿನ ಶ್ರೀ ವಿದ್ಯಾ ವಾಣಿಜ್ಯ ಶಾಲೆಗೆ ಶೇ. ೫೬ ಫಲಿತಾಂಶ ಬಂದಿದೆ. ಅಗಳಗಂಡಿಯ ಹೆಚ್. ಟಿ. ಗಜೇಂದ್ರ ಒಬ್ಬರೇ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿದ್ದು, ದ್ವಿತೀಯ ಶ್ರೇಣಿಯಲ್ಲಿ ಜೂನಿಯರ್ ನಲ್ಲಿ ನಾಲ್ವರು, ಸೀನಿಯರ್ ನಲ್ಲಿ ಇಬ್ಬರು ತೇರ್ಗಡೆಯಾಗಿದ್ದಾರೆ.

## ಅಸಮಾಧಾನದ ಹೊಗೆ

(೩ನೇ ಪುಟದಿಂದ)

ಹೀಗಿದ್ದೂ ಇಂಥ ಪರಿಸ್ಥಿತಿ ಉದ್ಭವಿಸಿದ್ದು ಹೇಗೆ ಎಂಬುದು ಎಲ್ಲರ ಪ್ರಶ್ನೆ.

ಸ್ವತಃ ನ.ರಾ.ಪುರ ತಾ||ನ ಮುಖಂಡರೇ ಈ ವಿಪರ್ಯಾಸದ ಬಗ್ಗೆ ಬೇಸರ ವ್ಯಕ್ತಪಡಿಸುತ್ತಾರೆ. ಆದರಲ್ಲೂ ಜನತಾ ಪಕ್ಷದ ಕ್ಷೇತ್ರ ಸಂಚಾಲಕರಾಗಿರುವ ಮಾಗ ಚಂದ್ರಶೇಖರ್‌ರವರಿಗೆ ಈ ಹಗರಣ ತಲೆ ಚಿಟ್ಟು ಹಿಡಿಸಿ, 'ಇದೆಲ್ಲ ಅತ್ಲಾಗೆ ಕೈಬಿಟ್ಟು ಕೈ ತೊಳೆದುಕೊಂಡು ಬಿಡೋಣ ಅನ್ನಿಸ್ತಿದೆ' ಎಂದು ಬೇಸರದಿಂದ ಹೇಳುತ್ತಿದ್ದರೆಂದು ಸಮಾಚಾರ.

ಅಂತೂ ಸದ್ಯದಲ್ಲೇ ಈ ಅಸಮಾಧಾನದ ಪರಿಣಾಮ ಪ್ರಕಟಗೊಳ್ಳುವ ಸೂಚನೆ ಇದೆ. ಆದರೆ ಹಾಗೆ ಅದನ್ನು ಸ್ಫೋಟಗೊಳ್ಳಲು ಬಿಡದೆ ಪಕ್ಷದೊಳಗೇ ಶಾಂತಿಯುತವಾಗಿ ಬಗೆಹರಿಸಲೂ ಹಲವರು ಪ್ರಯತ್ನಿಸುತ್ತಿದ್ದಾರೆಂದೂ ಗೊತ್ತಾಗಿದೆ.

'ಮುಂಜಾವು'

ಚಂದಾದರ: ವಾರ್ಷಿಕ ಚಂದಾ ೨೦ರೂ.

## ರೈತ ಚಳುವಳಿಯ ನಡುವೆಯೂ ಜಿಲ್ಲೆಯ ಪ್ರಾ. ಭೂ ಅ. ಬ್ಯಾಂಕ್‌ಗಳಲ್ಲಿ ಶೇ. ೬೭ರಷ್ಟು ಸಾಲ ವಸೂಲಿ

**ಚಿಕ್ಕಮಗಳೂರು: ರೈತಸಂಘದ ಪ್ರತಿಭಟನೆಯ ನಡುವೆಯೂ ಜಿಲ್ಲೆಯ ಎಂಟು ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕ್‌ಗಳು ಶೇ. ೬೭ ರಷ್ಟು ಸಾಲ ವಸೂಲಿ ಮಾಡಿವೆ.**

ಒಟ್ಟು ಬರಬೇಕಾಗಿದ್ದ ಸಾಲದ ಮೊತ್ತ ೧೬೭.೭೨ ಲಕ್ಷ ರೂ.ಗಳಾದರೆ ಜೂನ್ ಅಖೈರಿಗೆ ೧೧೧.೯ ಲಕ್ಷ ರೂ. ವಸೂಲಿಯಾಗಿದೆ ಎಂದು ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿಯ ಪ್ರಕಟಣೆ ತಿಳಿಸಿದೆ.

ಜಿಲ್ಲೆಯ ಸಹಕಾರಿ ಆಂದೋಳನಕ್ಕೆ ಓಂಕಾರ ಹಾಕಿದ ಕೊಪ್ಪ ತಾ||ನ ಕರಿಮನೆ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕ್ ಶೇ. ೮೮ ರಷ್ಟು ಸಾಲ ವಸೂಲಿ ಮಾಡಿದೆ. ಈ ಬ್ಯಾಂಕು ೨೧.೫೪ ಲಕ್ಷ ರೂ.ಗಳ ಸಾಲ ನೀಡಿದ್ದು ೧೦.೧೩ ಲಕ್ಷ ರೂ. ಸಾಲ ವಸೂಲಾಗಿದೆ. ದ್ವಿತೀಯ ಸ್ಥಾನ ಶೃಂಗೇರಿ ಭೂ ಅಭಿವೃದ್ಧಿ ಬ್ಯಾಂಕಿನದಾಗಿದ್ದು ಶೇ. ೮೦ ರಷ್ಟು ಸಾಲ ವಸೂಲಿಯಾಗಿದೆ.

ನರಸಿಂಹರಾಜಪುರ ಮತ್ತು ತರೀಕೆರೆ ೩ನೇ ಮತ್ತು ೪ನೇ ಸ್ಥಾನ ಪಡೆದಿವೆ.

## ಯಶಸ್ವಿ ರಸ್ತೆ ತಡೆ ಚಳುವಳಿ

(೧ನೇ ಪುಟದಿಂದ)

ಬಸ್ಸುಗಳು ಓಡಾಡುವಂತೆ ವ್ಯವಸ್ಥೆ ಮಾಡಿಸುವುದಾಗಿಯೂ, ತಪ್ಪಿದಲ್ಲಿ ಆರ್‌ಟಿಓ ಮತ್ತಿತರ ಮೇಲಧಿಕಾರಿಗಳಿಗೆ ಸೂಕ್ತ ವರದಿ ಮಾಡುವುದಾಗಿಯೂ ಭರವಸೆ ಕೊಟ್ಟರು. **ಅದರೆ ಈ ಸಂದರ್ಭದಲ್ಲಿ ಶಂಕರ್ ಕಂಪನಿಯವರ ಪ್ರತಿನಿಧಿಗಳು ಹಾಜರಿರದಿದ್ದುದನ್ನು ಅಲ್ಲಿ ಸೇರಿದ್ದ ರೈತರೆಲ್ಲ ತೀವ್ರವಾಗಿ ಖಂಡಿಸಿದರು.**

೧೭ ರಿಂದಲೇ ೨ ಬಸ್‌ಗಳ ಓಡಾಟ ಪುನಃ ಆರಂಭವಾದದ್ದು ಗಮನಾರ್ಹವಾಗಿತ್ತು.

ಜು. ೧೯ ರಂದು ಕೊಪ್ಪ ಪೋಲೀಸು ಠಾಣೆಯಲ್ಲಿ ನಡೆದ ಸಂಧಾನಕ್ಕೆ ಕಂಪನಿಯ ಇಬ್ಬರು ನೌಕರರು ಪ್ರತಿನಿಧಿಗಳಾಗಿ ಭಾಗವಹಿಸಿ, ಬಸ್ಸಿನ ಓಡಾಟ ಸುಸೂತ್ರಗೊಳಿಸಲು ಒಪ್ಪಿಕೊಂಡರೆಂದು ತಿಳಿದು ಬಂದಿದೆ.

ಈ ತಿಂಗಳ ಆರಂಭದಿಂದ ವಿವಿಧ ಮಾರ್ಗದಲ್ಲಿ ನಿಲ್ಲಿಸಲಾಗಿದ್ದ ೨೦ ಕ್ಕೂ ಹೆಚ್ಚು ಬಸ್‌ಗಳ ಪೈಕಿ ಸುಮಾರು ೧೫ ಬಸ್‌ಗಳು ಪುನಃ ಓಡಾಟ ಪ್ರಾರಂಭಿಸಿವೆಯೆಂದು ಹೇಳಲಾಗಿದೆ.

## ತಣ್ಣನೆಯ ಮೋಸ

(ಒಂದನೆಯ ಪುಟದಿಂದ)

ಆದರೆ, ಎಮ್ಮೆ ಬಂದರೂ ಸಂಗ್ರಹಣಾ ವ್ಯವಸ್ಥೆ ಐದಾರು ತಿಂಗಳು ತಡವಾಗಿ, ಸಾಲಗಾರರು ಕಂಗಾಲಾದ ನಂತರ ಕಾರ್ಯಾರಂಭ ಮಾಡಿದ ಈ ಕೇಂದ್ರ ತಡವಾಗಿಯಾದರೂ ಅವರಿಗೆ ಆಶಾಕಿರಣ ಮೂಡಿಸಿತ್ತು.

ಆದರೆ, ಈಗ ಇಂಥ ಜವಾಬ್ದಾರಿರಹಿತ ನಿರ್ವಹಣೆಯಿಂದಾಗಿ, ಸರ್ಕಾರಕ್ಕೂ ಸಮುದಾಯಕ್ಕೂ ಪರಸ್ಪರಲಾಭದಾಯಕವಾಗಿದ್ದ ಯೋಜನೆಯೊಂದು ಹೀಗೆ ಮುಗ್ಗರಿಸಿದೆ. ಇದರಲ್ಲಿ ಮೇಲಧಿಕಾರಿಗಳ ಹೊಣೆ ಹಿರಿದಾದದ್ದು. ತಜ್ಞತೆ ಹಾಗಿರಲಿ, ಕೆಲಸದ ಸರಿಯಾದ ಮಾಹಿತಿಯೂ ಇಲ್ಲದಿದ್ದವರು ನೇಮಕವಾದದ್ದು, ಅವರು ಜನರಿಗೆ ಮೋಸ ಮಾಡಿ ತಾವು ಹಾಲು ಮಾರಿಕೊಂಡಿದ್ದು ಮುಂತಾದ ಎಲ್ಲದರಲ್ಲಿ ತಪ್ಪಿತಸ್ಥರಾದವರ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಜನ ಹಾಗೂ ಅವರ ಪ್ರತಿನಿಧಿಗಳು ಒತ್ತಾಯಿಸಬೇಕಾಗಿದೆ.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: **ಸಿರಿಮನೆ ನಾಗರಾಜ್.**
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ